# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ : 761
ಸದಸ್ಯರ ಹೆಸರು : ಶ್ರೀ ಸುನೀಲ್ ಗೌಡ ಬಸನಗೌಡ ಪಾಟೀಲ್
ಉತ್ತರಿಸಬೇಕಾದ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿ, ಸಾರಿಗೆ ಸಚಿವರು
ಉತ್ತರಿಸಬೇಕಾಗಿದ್ದ ದಿನಾಂಕ : 25-07-2019

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| (ಅ) | ಖಾಸಗಿ ಸಾರಿಗೆ ಸಂಸ್ಥೆಯವರು ವಾರಾಂತ್ಯದಲ್ಲಿ ಮತ್ತು ಹಬ್ಬದ ದಿನಗಳಲ್ಲಿ ನಿಗಧಿತ ಪ್ರಯಾಣ ದರಕ್ಕಿಂತ ಅತ್ಯಂತ ಹೆಚ್ಚಿನ ಬಸ್ ದರವನ್ನು ಪ್ರಯಾಣಿಕರ ಮೇಲೆ ವಿಧಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹೆಚ್ಚಿನ ಬಸ್ ದರವನ್ನು ಪ್ರಯಾಣಿಕರಿಂದ ವಸೂಲು ಮಾಡಲು ಕಾನೂನು ಅಥವಾ ನಿಯಮಗಳಲ್ಲಿ ಅವಕಾಶವೇನಾದರೂ ಇದೆಯೇ; (ವಿವರ ನೀಡುವುದು) | ಹೌದು, ಮಜಲು ವಾಹನಗಳಿಗೆ ಏಕ ರೂಪದ ಪ್ರಯಾಣ ದರವನ್ನು ನಿಗದಿಪಡಿಸಲಾಗಿದೆ. ಅದರಂತೆ, ಹಬ್ಬ-ಹರಿದಿನಗಳು ಮತ್ತು ಜಾತ್ರೆ ಸಮಯದಲ್ಲಿ ಒಂದುವರೆ ಪಟ್ಟು ಹೆಚ್ಚು ಪ್ರಯಾಣ ದರ ವಿಧಿಸಲು ಅವಕಾಶವಿರುತ್ತದೆ. |
| (ಆ) | ಇದ್ದಲ್ಲಿ, ನಿಯಮ ಬಾಹಿರವಾಗಿ ಬಸ್ ದರ ನಿಗದಿಪಡಿಸುತ್ತಿರುವ ಖಾಸಗಿ ಸಾರಿಗೆ ಸಂಸ್ಥೆಗಳ ಮೇಲೆ ಕಾನೂನು ಕ್ರಮ ಕೈಗೊಳ್ಳದಿರಲು ಕಾರಣವೇನು; | ಖಾಸಗಿ ಸಾರಿಗೆ ಸಂಸ್ಥೆಗಳು ನಿಯಮ ಬಾಹಿರವಾಗಿ ಬಸ್ ದರವನ್ನು ವಸೂಲು ಮಾಡುತ್ತಿರುವ ಬಗ್ಗೆ ವಾಹನಗಳನ್ನು ಪ್ರವರ್ತನ ಕಾರ್ಯದ ಮೂಲಕ ತನಿಖೆ ಮಾಡಿ ಮೋಟಾರು ವಾಹನ ಕಾಯ್ದೆ ಕಲಂ 200 ಮತ್ತು 86 ರ ಅಡಿಯಲ್ಲಿ ಕ್ರಮ ಜರುಗಿಸಲಾಗುತ್ತಿದೆ. |
| (ಇ) | ಅವೈಜ್ಞಾನಿಕವಾಗಿ ಬಸ್ ಪ್ರಯಾಣ ದರ ವಿಧಿಸುತ್ತಿರುವುದನ್ನು ತಡೆಯಲು ಸರ್ಕಾರ ಏನು ಕ್ರಮ ಕೈಗೊಂಡಿದೆ? | ಸರ್ಕಾರವು ನಿಗದಿಪಡಿಸಿದ ದರಕ್ಕಿಂತ ಹೆಚ್ಚಿನ ದರವನ್ನು ಪ್ರಯಾಣಿಕರಿಂದ ವಸೂಲು ಮಾಡಬಾರದೆಂದು ಖಾಸಗಿ ಪ್ರವರ್ತಕರಿಗೆ ಮತ್ತು ಸಾರಿಗೆ ಸಂಸ್ಥೆಗಳಿಗೆ ಕಟ್ಟುನಿಟ್ಟಿನ ಸೂಚನೆ ನೀಡಲಾಗಿದೆ. |

ಟಿಡಿ 24 ಟಿಡಿಕ್ಯೂ 2019

(ಲಕ್ಷ್ಮಣ್ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿ ಹಾಗೂ ಸಾರಿಗೆ ಸಚಿವರು.